೨೦.

**122. ಸಂಶಯಃ-**
ಹೀಗೆ ಹಾಗೆ ಎಂದು ಒಂದು ಪದಾರ್ಥದಲ್ಲಿ ಎರಡು ಕಡೆಗೆ ತೂಗಾಡುವ ಮನಸ್ಸಿನ ವೃತ್ತಿ, ೪೨.

**123. ಸಂಸಾರಧರ್ಮಾಃ-**
ಶೋಕ ಮೋಹ ಮುಂತಾದ ಸಂಸಾರಕ್ಕೆ ಕಾರಣವಾದ ಧರ್ಮಗಳು, ೨, ೧೧.

**124. ಸಂಸ್ಕಾರ್ಯಮ್-**
ಅತಿಶಯವನ್ನು ಹೊಂದತಕ್ಕದ್ದು ; ಕರ್ಮಫಲದ ನಾಲ್ಕು ರೂಪಗಳಲ್ಲಿ ಒಂದು, ೧.

**125. ಸಂವತ್ಸರಾಃ-**
ಪ್ರಜಾಪತಿಬ್ರಹ್ಮರು, ೧೯.

**126. ಸಙ್ಕಲ್ಪಃ-**
ಹೀಗೆ ಮಾಡುವೆನೆಂದು ಕಲ್ಪಿಸುವ ಮನಸ್ಸಿನ ವೃತ್ತಿ, ೧೧.

**127. ಸತ್ಯಮ್-**
(1) ನಿಜವಾಗಿರುವದು, ೩.
(2) ಅವಶ್ಯವಾಗಿ ಫಲವನ್ನು ಕೊಡುವದು, ೩೫.
(3) ಹಿರಣ್ಯಗರ್ಭನ ಮತ್ತು ಲಿಂಗಾತ್ಮನ ಹೆಸರು, ೩೫.

**128. ಸತ್ಯಾತ್ಮಾ-**
ಸೂರ್ಯನಲ್ಲಿಯೂ ಪುರುಷನಲ್ಲಿಯೂ ಇರುವ ಸತ್ಯವೆಂಬ ಹೆಸರಿನ ಅಪರಬ್ರಹ್ಮ, ಹಿರಣ್ಯಗರ್ಭ, ೩೪, ೩೫.

**129. ಸಂನ್ಯಾಸಃ-**
ಕರ್ಮವನ್ನು ಬಿಡುವದು, ೩, ೩೩,

**130. ಸಂನ್ಯಾಸೀ-**
ಕರ್ಮವನ್ನು ಬಿಟ್ಟವನು, ೭, ೨೦.

**131. ಸಪ್ತಾನ್ನಸರ್ಗಃ-**
ಕರ್ಮದ ಫಲವಾಗಿ ಹುಟ್ಟುವ ಏಳು ಅನ್ನಗಳು, ೨೦.

**132. ಸಮುಚ್ಚಯಃ-**
ಕರ್ಮೋಪಾಸನೆಗಳನ್ನೂ ವ್ಯಾಕೃತಾ ವ್ಯಾಕೃತೋಪಾಸನೆಗಳನ್ನೂ ಕೂಡಿಸಿ ಅನುಷ್ಠಾನ ಮಾಡುವದು, ೨೩, ೨೯, ೩೧, ೪೧, ೪೨.

**133. ಸಂಬನ್ಧಃ-**
ಹಿಂದಿನ ಗ್ರಂಥಕ್ಕೂ ಈ ಗ್ರಂಥಭಾಗಕ್ಕೂ ಈ ಗ್ರಂಥದಲ್ಲಿರುವ ವಿಷಯಕ್ಕೂ ಪ್ರಯೋಜನಕ್ಕೂ ಇರುವ ಸಂಬಂಧವು, ೨.

**134. ಸರ್ವಜ್ಞಃ-**
ಎಲ್ಲವನ್ನೂ ಬಲ್ಲವನು, ಈಶ್ವರ, ೧೯.

**135. ಸರ್ವಪ್ರತ್ಯಯಸಾಕ್ಷೀ-**
ಎಲ್ಲಾ ಅಂತಃಕರಣದ ಅರಿವುಗಳನ್ನೂ ನೇರಾಗಿ ನೋಡುವ ಆತ್ಮನು, ೧೫.

**136. ಸರ್ವಭೂತಾನಿ-**
ಸ್ಥಾವರಜಂಗಮಪ್ರಾಣಿಗಳೆಲ್ಲವೂ, ೧೫.

**137. ಸರ್ವಾತ್ಮಭಾವಃ-**
ಎಲ್ಲಕ್ಕೂ ಆತ್ಮನಾಗುವಿಕೆ, ೩೩.

**138. ಸಾಕ್ಷೀ-**
ತನ್ನಲ್ಲಿ ಯಾವ ವಿಕಾರವೂ ಇಲ್ಲದೆಯೇ ನೇರಾಗಿ ನೋಡುವ ಆತ್ಮ, ೧೫.

**139. ಸಾಧ್ಯಸಾಧನಭೇದಃ-**
ಇದನ್ನು ಪಡೆಯುವದಕ್ಕೆ ಇದು ಸಾಧನವು ಎಂಬ ಭೇದ, ೨೧.

**140. ಸೂತ್ರಮ್, ಸೂತ್ರಾತ್ಮಾ-**
ಕ್ರಿಯಾಪ್ರಧಾನವಾಗಿರುವ ಅಪರಬ್ರಹ್ಮ, ವಾಯು, ೨೧.

**141. ಸೋಪಾಧಿಕಮ್-**
ಉಪಾಧಿಯಿಂದ ತೋರುವ ಆತ್ಮರೂಪ, ೧೧.

**142. ಸ್ಥೂಲಶರೀರಮ್-**
ಇಂದ್ರಿಯಗಳಿಗೆ ಗೋಚರವಾಗುವ ಪ್ರಸಿದ್ಧವಾದ ಶರೀರವು, ೧೯.

**143. ಸ್ವಾಭಾವಿಕಮ್-**
(1) ವಿಚಾರವಿಲ್ಲದ ಸ್ವಭಾವದ, ೨, ೩.
(2) ಸ್ವರೂಪವಾದ, ೧೨.

**144. ಹಿರಣ್ಯಗರ್ಭಃ-**
ಕಾರ್ಯಬ್ರಹ್ಮ, ಅಪರಬ್ರಹ್ಮ; ಉಪಾಸನೆ- ಯಿಂದ ಪಡೆಯಬೇಕಾಗಿರುವ ಉತ್ತಮಗತಿ, ೨೮, ೩೨.

8. **ತೈತ್ತಿರೀಯೋಪನಿಷತ್ತು :** ಇದರಲ್ಲಿ ಶಿಕ್ಷಾವಲ್ಲಿ, ಆನಂದವಲ್ಲಿ, ಭೃಗುವಲ್ಲಿ ಎಂಬ ಮೂರು ಭಾಗಗಳಿವೆ. ಕರ್ಮಗಳಿಗೂ ಜ್ಞಾನಕ್ಕೂ ಇರುವ ಸಂಬಂಧ, ಪರಬ್ರಹ್ಮ ಪ್ರಾಪ್ತಿಗೂ ಅಪರಬ್ರಹ್ಮ ಪ್ರಾಪ್ತಿಗೂ ಇರುವ ತಾರತಮ್ಯ, ನಿರ್ವಿಶೇಷವಾದ ಬ್ರಹ್ಮಾನಂದವನ್ನು ಇಲ್ಲಿಯೇ ಅನುಭವಕ್ಕೆ ತಂದುಕೊಂಡರೆ ಪರಮಮುಕ್ತಿಯು ಲಭಿಸುವುದು - ಎಂಬುದರ ರಹಸ್ಯ, ದ್ವೈತವೂ ಜೀವನಸಂಸಾರಿತ್ವವೂ ಅವಿದ್ಯಕವೆಂಬುದು, ವಿದ್ಯಾವಿದ್ಯೆಗಳು ಆತ್ಮನ ಧರ್ಮವಲ್ಲ - ಎಂಬಿವೇ ಮುಂತಾದ ವಿಷಯಗಳನ್ನು ಇಲ್ಲಿ ಪ್ರತಿಪಾದಿಸಿದೆ. ಹೊಸ ಸಂಸ್ಕರಣ. (ಪುಟಗಳು ೩೩೬)

9. **ಛಾಂದೋಗ್ಯೋಪನಿಷತ್ತು :** ಈ ಉಪನಿಷತ್ತು ಸಾಮವೇದಕ್ಕೆ ಸೇರಿದ್ದು. ಇದರಲ್ಲಿ ಮೊದಲನೆಯ ಐದು ಅಧ್ಯಾಯಗಳಲ್ಲಿ ಕ್ರಮವಾಗಿ ಉಪಾಸನೆಗಳ ವಿವರಗಳನ್ನು ವಿಸ್ತಾರವಾಗಿ ತಿಳಿಸಿ ಅನಂತರ ಆರನೆಯ ಅಧ್ಯಾಯದಿಂದ ಮುಂದೆ ಆತ್ಮಜ್ಞಾನವನ್ನು ಪ್ರತಿಪಾದಿಸಿದೆ. ಈ ಉಪನಿಷತ್ತಿನಲ್ಲಿರುವ ವಿಷಯ ವಾಕ್ಯಗಳು ಬ್ರಹ್ಮಸೂತ್ರಭಾಷ್ಯದಲ್ಲಿ ವಿಚಾರಕ್ಕೆ ಬಹಳವಾಗಿ ತೆಗೆದುಕೊಳ್ಳಲ್ಪಟ್ಟಿವೆ. ತತ್ತ್ವಮಸಿಮಹಾವಾಕ್ಯದ ವಿಸ್ತಾರವಾದ ವಿವರವು ಇದರಲ್ಲಿಯೇ ಸೇರುವದು. ಭೂಮವಿದ್ಯೆ, ದಹರವಿದ್ಯೆ - ಮುಂತಾದ ಅನರ್ಘ್ಯವಿಷಯಗಳೂ ಇದರಲ್ಲಿ ಅಡಕವಾಗಿವೆ. ಶಾಂಕರವೇದಾಂತದ ಅಮೋಘ ವಿಚಾರಗಳ ಮನನಕ್ಕೆ ಅತ್ಯುತ್ತಮ ಗ್ರಂಥವಿದು. (ಪುಟಗಳು ೧೧೦೦)

10. **ಬೃಹದಾರಣ್ಯಕೋಪನಿಷತ್ತು (1-2ನೆಯ ಭಾಗಗಳು) :** ಹೆಸರಿಗೆ ತಕ್ಕಂತೆ ಉಪನಿಷತ್ತುಗಳಲ್ಲೆಲ್ಲ ದೊಡ್ಡದಾಗಿರುವ, ಶುಕ್ಲಯಜುರ್ವೇದಕ್ಕೆ ಸೇರಿರುವ ಈ ಉಪನಿಷತ್ತಿಗೆ ಆಚಾರ್ಯರು ವಿಸ್ತಾರವಾಗಿ ಭಾಷ್ಯವನ್ನು ಬರೆದಿರುತ್ತಾರೆ. ಮಧುಕಾಂಡವೆಂದು ಪ್ರಸಿದ್ಧವಾಗಿರುವ ಇದರ ಮೊದಲನೆಯ ಎರಡು ಅಧ್ಯಾಯಗಳಲ್ಲಿ ಆಗಮಪ್ರಧಾನವಾಗಿ ತತ್ತ್ವವನ್ನು ತಿಳಿಸಿರುತ್ತದೆ. ಮೂರು-ನಾಲ್ಕನೆಯ ಅಧ್ಯಾಯಗಳು ಮುನಿಕಾಂಡವೆಂಬ ಹೆಸರಿನಿಂದ ತರ್ಕಪ್ರಧಾನವಾಗಿದ್ದು ಆಗಮೋಪಪತ್ತಿಗಳಿಂದ ತತ್ತ್ವವನ್ನು ವಿವರಿಸುತ್ತವೆ. ಕೊನೆಯ ಎರಡು ಅಧ್ಯಾಯಗಳು ಖಿಲಕಾಂಡವೆಂದು ಪ್ರಸಿದ್ಧವಾಗಿದ್ದು ಉಪಾಸನಾಭಾಗವನ್ನು ಒಳಗೊಂಡಿವೆ. ಆತ್ಮಸ್ವರೂಪವನ್ನು ಅವಸ್ಥಾತ್ರಯಪರೀಕ್ಷೆಯಿಂದ ಗೊತ್ತುಪಡಿಸುವ ವಿಚಾರಸರಣಿಯು ಇದರಲ್ಲಿ ಬಹಳ ಸುಂದರವಾಗಿದೆ. ಯಾಜ್ಞವಲ್ಕ್ಯ-ಮೈತ್ರೇಯೀ ಸಂವಾದ-ಮುಂತಾದ ಕಥಾರೂಪಗಳಿಂದ ತತ್ತ್ವವನ್ನು ಹೃದಯಂಗಮವಾಗಿ ಪ್ರತಿಪಾದಿಸುವ ಉಪನಿಷತ್ತಿದು. ಆಚಾರ್ಯರು ಈ ಭಾಷ್ಯದಲ್ಲಿ ಅನೇಕ ವಿಷಯಗಳ ವಿಸ್ತಾರವಾದ ಚರ್ಚೆಯನ್ನು ಮಾಡಿ ಈ ಉಪನಿಷತ್ತಿನ ರಹಸ್ಯಗಳನ್ನೆಲ್ಲ ಹೊರಗೆಡವಿರುತ್ತಾರೆ. ಜಿಜ್ಞಾಸುಗಳು ಅವಶ್ಯವಾಗಿ ಸಂಗ್ರಹಿಸಬೇಕಾದ ಉಪನಿಷತ್ತಿದು. (ಪುಟಗಳು ೧-೭೩೬ : ೨-೧೦೧೮)

# ಶ್ರೀಶ್ರೀ ಸಚ್ಚಿದಾನಂದೇಂದ್ರ ಸರಸ್ವತೀ ಸ್ವಾಮಿಗಳವರ

## ಉಪನ್ಯಾಸಗಳು

ಉಪನಿಷತ್ತುಗಳ ಅಭಿಪ್ರಾಯವನ್ನು ಸರಳವಾದ ತಿಳಿಗನ್ನಡದಲ್ಲಿ ವಿವರಿಸುವ ಮಂಜರಿಗಳು.

| | | |
|---|---|---|
| ಈಶಾವಾಸ್ಯೋಪನ್ಯಾಸಮಂಜರಿ | ಪುಟಗಳು | ೩೩ |
| ಕೇನೋಪನ್ಯಾಸಮಂಜರಿ | ಪುಟಗಳು | ೪೮ |
| ಕಾಠಕೋಪನ್ಯಾಸಮಂಜರಿ | ಪುಟಗಳು | ೨೫೮ |
| ಪ್ರಶ್ನೋಪನ್ಯಾಸಮಂಜರಿ | ಪುಟಗಳು | ೮೮ |
| ಮುಂಡಕೋಪನ್ಯಾಸಮಂಜರಿ | ಪುಟಗಳು | ೮೮ |
| ಮಾಂಡೂಕ್ಯೋಪನ್ಯಾಸಮಂಜರಿ | ಪುಟಗಳು | ೧೧೬ |

ಈ ಮಂಜರಿಗಳಲ್ಲಿ ಉಪನಿಷತ್ತಿನ ಭಾಷ್ಯಾಭಿಪ್ರಾಯವನ್ನು ಅನುಸರಿಸಿಯೇ ವಿವರಗಳನ್ನು ಕೊಟ್ಟಿದೆ. ಉಪನಿಷತ್ತಿನ ಒಟ್ಟರ್ಥವನ್ನು ತಿಳಿಯುವುದಕ್ಕೆ ತುಂಬ ಸಹಾಯಕವಾಗಿವೆ. ಮೊದಲು ಈ ಗ್ರಂಥಗಳನ್ನು ಓದಿ ಅನಂತರ ಉಪನಿಷತ್ತಿನ ಮೂಲ ಭಾಷ್ಯವನ್ನೋದಿದರೆ ಅನೇಕ ವಿಷಯಗಳು ಸುಲಭವಾಗಿ ತಿಳಿಯಲು ಅನುಕೂಲವಾಗುವುದು. ವಾಚಕರು ಉಪನಿಷತ್ತುಗಳನ್ನು ಭಾಷ್ಯಸಮೇತ ಅಧ್ಯಯನ ಮಾಡುವುದಕ್ಕೆ ಮುಂಚೆ ಮಂಜರಿಗಳನ್ನು ಅವಶ್ಯಕವಾಗಿ ಓದಬೇಕು.

ವಿಶೇಷ ವಿವರಗಳಿಗೆ ಮತ್ತು ಪುಸ್ತಕಗಳ ಪೂರ ಬೆಲೆ ಪಟ್ಟಿಗೆ ಬರೆದುಕೊಳ್ಳಿರಿ.

---

ಅಧ್ಯಾತ್ಮಪ್ರಕಾಶಕಾರ್ಯಾಲಯ
ಹೊಳೆನರಸೀಪುರ
ಹಾಸನಜಿಲ್ಲೆ 573211
08175-73820

ಅಧ್ಯಾತ್ಮಪ್ರಕಾಶಕಾರ್ಯಾಲಯ
ತ್ಯಾಗರಾಜನಗರ
ಬೆಂಗಳೂರು 560 028.
625548